# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಮಾನ್ಯ ಸದಸ್ಯರ ಹೆಸರು | : | ಶ್ರೀ ಆರ್.ಪ್ರಸನ್ನಕುಮಾರ್ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | **990** (೯೦೦) |
| ಉತ್ತರಿಸಬೇಕಾದ ದಿನಾಂಕ | : | 10.03.2021 |
| ಉತ್ತರಿಸಬೇಕಾದ ಸಚಿವರು | : | ವಸತಿ ಸಚಿವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದ ಗ್ರಾಮೀಣ ಪ್ರದೇಶದಲ್ಲಿ ಬಡವರಿಗಾಗಿ ಸೂರು ಕಲ್ಪಿಸುವ ಸರ್ಕಾರದ ಯಾವ ಯಾವ ವಸತಿ ಯೋಜನೆಗಳು ಪ್ರಸ್ತುತ ಜಾರಿಯಲ್ಲಿವೆ; (ವಿವರ ನೀಡುವುದು) | ರಾಜ್ಯದಲ್ಲಿ ಗ್ರಾಮೀಣ ಪ್ರದೇಶದಲ್ಲಿ ಬಡವರಿಗಾಗಿ ಸೂರು ಕಲ್ಪಿಸಲು ಈ ಕೆಳಕಂಡ ಯೋಜನೆಗಳು ಜಾರಿಯಲ್ಲಿರುತ್ತವೆ.<br>**ಯೋಜನೆಗಳ ವಿವರ :**<br>• ಬಸವ ವಸತಿ ಯೋಜನೆ<br>• ಡಾ.ಬಿ.ಆರ್.ಅಂಬೇಡ್ಕರ್ ನಿವಾಸ್ ಯೋಜನೆ<br>• ದೇವರಾಜ್ ಅರಸು ವಸತಿ ಯೋಜನೆ<br>• ಪ್ರಧಾನ ಮಂತ್ರಿ ಆವಾಸ್ ಯೋಜನೆ (ಗ್ರಾಮೀಣ) |
| ಆ) | ಶಿವಮೊಗ್ಗ ಜಿಲ್ಲೆಗೆ ಕಳೆದ ಮೂರು ವರ್ಷಗಳಲ್ಲಿ ಪ್ರಸ್ತುತ ಯಾವ ಯಾವ ಯೋಜನೆಯಡಿ ವಸತಿ ಸೌಲಭ್ಯ ಕಲ್ಪಿಸಿಕೊಡಲಾಗಿದೆ; | ಶಿವಮೊಗ್ಗ ಜಿಲ್ಲೆಗೆ 2017-18ನೇ ಸಾಲಿನಿಂದ 2019-20 ನೇ ಸಾಲಿನವರೆಗೆ ಈ ಕೆಳಕಂಡ ವಸತಿ ಯೋಜನೆಗಳಡಿಯಲ್ಲಿ 13759 ಫಲಾನುಭವಿಗಳಿಗೆ ವಸತಿ ಸೌಲಭ್ಯ ಕಲ್ಪಿಸಿಕೊಡಲಾಗಿದ್ದು, ವಿವರ ಕೆಳಕಂಡಂತಿದೆ. |

| ಕ್ರ. ಸಂ | ಯೋಜನೆ | ಮಂಜೂರು ಮಾಡಲಾದ ಮನೆಗಳು |
|---|---|---|
| 1 | ಬಸವ ವಸತಿ ಯೋಜನೆ | 10518 |
| 2 | ಡಾ.ಬಿ.ಆರ್.ಅಂಬೇಡ್ಕರ್ ನಿವಾಸ್ ಯೋಜನೆ (ಗ್ರಾಮೀಣ) | 946 |
| 3 | ದೇವರಾಜ್ ಅರಸು ವಸತಿ ಯೋಜನೆ (ಗ್ರಾಮೀಣ) | 27 |
| 4 | ಪ್ರಧಾನ ಮಂತ್ರಿ ಆವಾಸ್ ಯೋಜನೆ (ಗ್ರಾಮೀಣ) | 652 |
| 5 | ವಾಜಪೇಯಿ ನಗರ ವಸತಿ ಯೋಜನೆ | 1616 |
| | **ಒಟ್ಟು** | **13759** |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಇ) | ಗ್ರಾಮೀಣ ಪ್ರದೇಶದಲ್ಲಿ ಫಲಾನುಭವಿಗಳಿಗೆ ನೀಡಲಾಗುತ್ತಿರುವ ಸಹಾಯ ಧನದ ಮೊತ್ತವೆಷ್ಟು; ಹಾಗೂ ಈ ಸಹಾಯಧನವನ್ನು ಯಾವ ಆಧಾರದ ಮೇಲೆ ನೀಡಲಾಗಿದೆ ? | ಗ್ರಾಮೀಣ ಪ್ರದೇಶದಲ್ಲಿ ವಿವಿಧ ವಸತಿ ಯೋಜನೆಗಳಡಿ ಫಲಾನುಭವಿಗಳಿಗೆ ನೀಡಲಾಗುತ್ತಿರುವ ಸಹಾಯಧನದ ವಿವರ ಈ ಕೆಳಕಂಡಂತಿದೆ.<br>**(ರೂ.ಲಕ್ಷಗಳಲ್ಲಿ)** |

| ಯೋಜನೆ | ಕೇಂದ್ರದ ಪಾಲು | | ರಾಜ್ಯದ ಪಾಲು | |
|---|---|---|---|---|
| | ಸಾಮಾನ್ಯ / ಅ.ಸಂ | ಪ.ಜಾ / ಪ.ಪಂ | ಸಾಮಾನ್ಯ / ಅ.ಸಂ | ಪ.ಜಾ / ಪ.ಪಂ |
| ಬಸವ ವಸತಿ ಯೋಜನೆ | - | - | 1.20 | - |
| ಡಾ.ಬಿ.ಆರ್ ಅಂಬೇಡ್ಕರ್ ನಿವಾಸ್ ಯೋಜನೆ | - | - | - | 1.75 |

| | | | | | | |
|---|---|---|---|---|---|---|
| | | ಡಿ.ದೇವರಾಜು ಅರಸು ವಸತಿ ಯೋಜನೆ | - | - | 1.20 | 1.50 |
| | | ಪ್ರಧಾನ ಮಂತ್ರಿ ಆವಾಸ್ ಯೋಜನೆ | 0.72 | 0.72 | 0.48 | 0.78 |

ಗ್ರಾಮೀಣ ಪ್ರದೇಶಗಳಲ್ಲಿ ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ಹಿಂದುಳಿದ ವಸತಿರಹಿತರಿಗೆ ವಸತಿ ಸೌಲಭ್ಯ ಒದಗಿಸಲಾಗುತ್ತಿದ್ದು, ಫಲಾನುಭವಿಯು ಮಾನದಂಡಗಳನ್ನು ಹೊಂದಿರುವ ವಿವರ ಅನುಬಂಧದಲ್ಲಿ ಒದಗಿಸಲಾಗಿದೆ.

ವಸತಿ ಯೋಜನೆಗಳಡಿ ಆಯ್ಕೆಗೊಂಡ ಫಲಾನುಭವಿಗಳು ಮನೆ ನಿರ್ಮಾಣ ಮಾಡಲಾದ ಜಿ.ಪಿ.ಎಸ್ ಆಧಾರಿತ ಭೌತಿಕ ಪ್ರಗತಿಗನುಗುಣವಾಗಿ ಆಡಿಟ್ ಒಪ್ಪಿಗೆ ಆದಂತಹ ಮನೆಗಳಿಗೆ ಸಹಾಯಧನವನ್ನು ನೇರವಾಗಿ ಫಲಾನುಭವಿಗಳ ಆಧಾರ್ ಜೋಡಣೆಯಾದ ಬ್ಯಾಂಕ್ ಖಾತೆಗೆ ಬಿಡುಗಡೆ ಮಾಡಲಾಗುತ್ತದೆ.

ಸಂಖ್ಯೆ :ವಇ 97 ಹೆಚ್‌ಎಎಂ 2021

(ವಿ. ಸೋಮಣ್ಣ)
ವಸತಿ ಸಚಿವರು

# ಅನುಬಂಧ

ಗ್ರಾಮೀಣ ಪ್ರದೇಶಗಳಲ್ಲಿ ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ಹಿಂದುಳಿದ ವಸತಿ ರಹಿತರಿಗೆ ವಸತಿ ಸೌಲಭ್ಯ ಒದಗಿಸಲು ಫಲಾನುಭವಿಗಳು ಹೊಂದಿರುವ ಮಾನದಂಡಗಳು ಕೆಳಕಂಡಂತಿದೆ.

- ಅರ್ಜಿದಾರರು ಕಡ್ಡಾಯವಾಗಿ ಮಹಿಳೆಯಾಗಿರಬೇಕು (ವಿವಾಹಿತ ಅಥವಾ ಏಕ ಮಹಿಳಾ ಒಡೆತನದ ಗೃಹಿಣಿ). ಮಾಜಿ ಯೋಧರು, ವಿಧುರರು, ಅಂಗವಿಕಲರು ಮತ್ತು ಹಿರಿಯ ನಾಗರೀಕರಾಗಿದ್ದಲ್ಲಿ ಪುರುಷರು ಸಹಾ ಅರ್ಹರಾಗಿರುತ್ತಾರೆ.
- ಅರ್ಜಿಧಾರರ ಕುಂಟುಂಬವು ಆರ್ಥಿಕವಾಗಿ ಮತ್ತು ಸಾಮಾಜಿಕವಾಗಿ ಹಿಂದುಳಿದಿದ್ದು, ವಾರ್ಷಿಕ ಆದಾಯವು ಗ್ರಾಮೀಣ ಪ್ರದೇಶದವರಾಗಿದ್ದಲ್ಲಿ ರೂ.32,000/- ಕ್ಕಿಂತ ಕಡಿಮೆ ಇರಬೇಕು ನಗರ ಪ್ರದೇಶದಲ್ಲಿ ರೂ.87,600/-ರ ಒಳಗಿರಬೇಕು.
- ಅರ್ಜಿದಾರರ ಕುಟುಂಬವು ವಸತಿ ರಹಿತರಾಗಿದ್ದು, ಅರ್ಜಿದಾರರು ಅಥವಾ ಕುಟುಂಬದ ಯಾವುದೇ ಸದ್ಯಸರ ಹೆಸರಿನಲ್ಲಿ ಕರ್ನಾಟಕದ ಯಾವುದೇ ಭಾಗದಲ್ಲಿ ಸ್ವಂತ ಮನೆಯನ್ನು ಹೊಂದಿರಬಾರದು. ಶಿಥಿಲಗೊಂಡ ಮನೆ ಅಥವಾ ಗುಡಿಸಲಿನಲ್ಲಿ ವಾಸಿಸುತ್ತಿರುವವರು ಅರ್ಹರಾಗಿರುತ್ತಾರೆ.
- ಅರ್ಜಿದಾರರು ಸ್ವಂತ ನಿವೇಶನ ಹೊಂದಿದ್ದು ನಿವೇಶನಕ್ಕೆ ಸಂಬಂಧಿಸಿದಂತೆ ಖಾತೆ ಹೊಂದಿರಬೇಕು (ಪಾರಂಪರಿಕ ಅರಣ್ಯ ಹಕ್ಕುಗಳ ಕಾಯ್ದೆಯನ್ವಯ ಜಿಲ್ಲಾ ಸಮಿತಿಯಿಂದ ನೀಡಲಾದ ಹಕ್ಕುಪತ್ರ ಪಡೆದಿದ್ದಲ್ಲಿ ವಸತಿ ಸೌಕರ್ಯ ಪಡೆಯಲು ಪರಿಗಣಿಸಬಹುದಾಗಿದೆ.)
- ಬೇರೆ ಯಾವುದೇ ಯೋಜನೆ/ಇಲಾಖೆಯಿಂದ ಈಗಾಗಲೇ ವಸತಿ ಸೌಲಭ್ಯ ಪಡೆದಿರಬಾರದು.
- ಪ್ರಧಾನ ಮಂತ್ರಿ ಆವಾಸ್ ಯೋಜನೆ(ಗ್ರಾ)ಯಡಿ ವಸತಿ ಸೌಲಭ್ಯ ಪಡೆಯಲು ಕೇಂದ್ರ ಸರ್ಕಾರದಿಂದ ನೀಡಲಾದ ಸಾಮಾಜಿಕ ಆರ್ಥಿಕ ಮತ್ತು ಜಾತಿ ಜನಗಣತಿ 2011ರ ಪಟ್ಟಿಯಲ್ಲಿ ಹೆಸರು ಸೇರಿರಬೇಕು.